- ❖ ಸಭೆ/ಸಮಿತಿಗಳ ದಿನಾಂಕಗಳನ್ನು ಗುರುತಿಸಿ, ಅಧಿಕಾರಿಗಳಿಗೆ ನೆನಪಿಸುವುದು ಹಾಗೂ ಕಡತಗಳನ್ನು ಪಡೆದು ಸಲ್ಲಿಸುವುದು.
- ❖ ಸಭೆ/ಸಮಿತಿಯಗಳಲ್ಲಿ ನಡವಳಿಗಳನ್ನು ತೆಗೆದುಕೊಂಡು ಕರಡನ್ನು ತಯಾರಿಸುವುದು.
- ❖ ಗಣಕಯಂತ್ರದ ಮೂಲಕ ಎಲ್.ಎಂ.ಎಸ್/ಎಫ್.ಎಂ.ಎಸ್. ನಿರ್ವಹಿಸುವುದು.
- ❖ ಕರ್ನಾಟಕ ಸರ್ಕಾರ ಸಚಿವಾಲಯ ಕೈಪಿಡಿಯ ಪ್ರಕಾರ ಕಾರ್ಯನಿರ್ವಹಿಸುವುದು.

**ದಲಾಯತ್:–**

- ❖ ಇವರು ಕಛೇರಿಗಳನ್ನು ಸ್ವಚ್ಛವಾಗಿಡುವುದು.
- ❖ ಪತ್ರಗಳನ್ನು ಮತ್ತು ಕಡತಗಳನ್ನು ವಿವಿಧ ಶಾಖೆಗಳಿಗೆ ಇಲಾಖೆಗಳಿಗೆ ನಿಯಮಾನುಸಾರ ನೀಡುವುದು.
- ❖ ಮುಕ್ತಾಯಗೊಳಿಸಿದ ಕಡತಗಳನ್ನು ಸರಿಯಾಗಿ ಹೊಲಿದು ದಾಖಲೆಗಳ ಕೊಠಡಿಗೆ ಕಳುಹಿಸುವುದು.

**ಜಲಸಂಪನ್ಮೂಲ ತಾಂತ್ರಿಕ–1 ಶಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ವಿಷಯಗಳು ಮತ್ತು ಅದರ ಅಧಿಕಾರಿ ವ್ಯಾಪ್ತಿ:–**

- ❖ ತುಂಗಾ ಮೇಲ್ದಂಡೆ ಯೋಜನಾ ವಲಯ, ಶಿವಮೊಗ್ಗ ಹಾಗೂ ನೀರಾವರಿ ಕೇಂದ್ರ ವಲಯ, ಮುನಿರಾಬಾದ್ ವಲಯಕ್ಕೆ ಸಂಬಂಧಿಸಿದಂತೆ ಎಲ್ಲಾ ತಾಂತ್ರಿಕ ವಿಷಯವು ಹಾಗೂ ಆಡಳಿತಾತ್ಮಕ ಅನುಮೋದನೆ ಪ್ರಸ್ತಾವನೆಗಳು, ಭೂಸ್ವಾಧೀನ ಪ್ರಕರಣಗಳು ಹಾಗೂ ತುಂಗಭದ್ರಾ ಮಂಡಳಿಯ ಪ್ರಸ್ತಾವನೆಗಳು.
- ❖ ಮೇಲೆ ತಿಳಿಸಿರುವ ವಲಯಕ್ಕೆ ಸಂಬಂಧಿಸಿದಂತೆ ಅಧಿಕಾರಿಗಳು/ಸಿಬ್ಬಂದಿಗಳ ವಿರುದ್ದ ಬಂದಿರುವ ದೂರಿನ ವಿರುದ್ದ ವರದಿ ತರಿಸಿ ಕ್ರಮ ಕೈಗೊಳ್ಳುವುದು.
- ❖ ಮೇಲೆ ತಿಳಿಸಿರುವ ವಲಯಗಳಿಗೆ ಸಂಬಂಧಿಸಿದ ಯೋಜನೆ ಕಾಮಗಾರಿಯ ಅಂದಾಜು/ಟೆಂಡರ್ ಗಳನ್ನು ತಾಂತ್ರಿಕ ಸಲಹಾ ಸಮಿತಿಯ ಮುಂದೆ ಮಂಡಿಸುವುದು.

**ಜಸಂಇ (ಕಾಡಾ) ಶಾಖೆಯ ಸಿಬ್ಬಂಧಿ ಯವರ ಮತ್ತು ಕಾರ್ಯಭಾರದ ವಿವರಗಳು ಸಿಬ್ಬಂಧಿವಾರು ಈ ಕೆಳಗಿನಂತಿದೆ.**

| ಕ್ರ ಸಂ. | ಹೆಸರು ಮತ್ತು ಹುದ್ದೆ | ಕಛೇರಿ ದೂರವಾಣಿ ಸಂಖ್ಯೆ | ವೇತನ ಶ್ರೇಣಿ | ಒಟ್ಟು ವೇತನ |
|---|---|---|---|---|
| 1 | ಎಲ್. ಭೈರಪ್ಪ, ಅಧೀನಕಾರ್ಯದರ್ಶಿ (ಕಾಡಾ) | 22034732 | 28,100–50,100 | 42,400 |
| 2 | ಸವಿತಾ ದಯಾನಂದ, ಸಹಾಯಕ ಸಾಂಖ್ಯಿಕ ಅಧಿಕಾರಿ | 22034733 | 10,000–18,150 | 18,278 |
| 3 | ಜಿ.ಹೆಚ್. ಸರೋಜಮ್ಮ, ಹಿರಿಯ ಸಹಾಯಕಿ | 22034733 | 19,000–34,500 | 31,200 |
| 4 | ಶೀಘ್ರಲಿಪಿಗಾರ್ತಿ | | | |
| 5 | ಬಿ.ಡಿ. ಭಾರ್ಗವನ್, ಪ್ರ.ದ.ಲೆಕ್ಕ ಸಹಾಯಕ | 22034733 | 14,450–26,100 | 24,900 |
| 6 | ಎಂ.ಆರ್. ಓಂಪ್ರಕಾಶ್, ಕಿರಿಯ ಸಹಾಯಕ | 22034733 | 11,600–21,000 | 17,450 |
| 7 | ಹನುಮಂತಯ್ಯ. ಸಿ.ಹೆಚ್. ಶಾಖಾಧಿಕಾರಿ | 22034733 | 22,800–43200 | 34,650 |

1. **ಅಧೀನ ಕಾರ್ಯದರ್ಶಿ:–** ಕಡತ ಮತ್ತು ಪತ್ರಗಳ ನಿರ್ವಹಿಸುವಲ್ಲಿ ವಿಷಯ ನಿರ್ವಾಹಕರಿಗೆ ಸಲಹೆ / ಸೂಚನೆ ಮತ್ತು ನಿರ್ದೇಶನಗಳನ್ನು ನೀಡುವರು ಹಾಗೂ ಶಾಖೆಯ ಮೇಲಾಧಿಕಾರಿಯಾಗಿರುತ್ತಾರೆ.
2. **ಶಾಖಾಧಿಕಾರಿ:–** ಶಾಖೆಯ ಮುಖ್ಯಸ್ಥರಾಗಿದ್ದುಕೊಂಡು ಶಾಖೆಯ ವಿಷಯ ನಿರ್ವಾಹಕರಿಗೆ ಕಡತ ಮತ್ತು ಪತ್ರ ನಿರ್ವಹಣೆಯಲ್ಲಿ ಸಲಹೆ / ಸೂಚನೆಗಳನ್ನು ನೀಡುವರು ಹಾಗೂ ಪ್ರಮುಖ ವಿಷಯವನ್ನು ಮೇಲಾಧಿಕಾರಿಯವರ ನಿರ್ದೇಶನದ ಮೇರೆಗೆ ತಾವೇ ಖುದ್ದಾಗಿ ನಿರ್ವಹಿಸುವರು.
3. **ಹಿರಿಯ ಸಹಾಯಕರು:–** ರಾಜ್ಯದಲ್ಲಿರುವ ಆರು ಕಾಡಾ ಪ್ರಾಧಿಕಾರಗಳಲ್ಲಿ ಕೆಲಸ ನಿರ್ವಹಿಸುವ ಅಧಿಕಾರಿ / ನೌಕರರ ಸೇವಾ ವಿಷಯಗಳು, ಸಾರ್ವಜನಿಕ ಮನವಿಗಳು, ಇಲಾಖಾ ವಿಚಾರಣೆ ಹಾಗೂ ನ್ಯಾಯಾಲಯ ವಿಷಯಗಳನ್ನು ನಿರ್ವಹಿಸುವರು.
4. **ಪ್ರಥಮ ದರ್ಜೆ ಸಹಾಯಕರು:–** ರಾಜ್ಯದ ಆರು ಕಾಡಾಗಳಿಗೆ ಹಾಗೂ ವಾಲ್ಮಿ ಸಂಸ್ಥೆಗೆ ಸಹಾಯಾನುದಾನ ಬಿಡುಗಡೆ ಮಾಡುವುದು, ಅ & ಇ. ಉ. ವರದಿಯ ಇಲಾಖಾ ಟಿಪ್ಪಣಿಗಳಿಗೆ ಮಾಹಿತಿ ಒದಗಿಸುವದು. ಕೇಂದ್ರ ಪುರಸ್ಕೃತ ಪುನರ್ ರೂಪಿತ ಕಾಡಾ ಕಾರ್ಯಕ್ರಮದಡಿ ಕೇಂದ್ರೀಯ ಸಹಾಯಧನ ಬಿಡುಗಡೆ, ವಿಶೇಷ ಅಭಿವೃದ್ಧಿ ಯೋಜನೆಯಡಿಯಲ್ಲಿ ಆಯವ್ಯಯ ಸಲ್ಲಿಸುವ ಬಗ್ಗೆ ಆಡಿಟ್ ಪ್ಯಾರಾಗಳ ತೀರುವಳಿಯ ಮುಂತಾದ ಲೆಕ್ಕ ವಿಷಯಗಳ ವ್ಯಾಪ್ತಿಗೆ ಸಂಬಂಧಪಟ್ಟ ವಿಷಯಗಳನ್ನು ನಿರ್ವಹಿಸುವುದು.
5. **ಸಹಾಯಕ ಸಾಂಖ್ಯಿಕ ಅಧಿಕಾರಿ:**ಎಂ.ಎಂ.ಆರ್. ಸಭೆಯ ವಿಷಯ ನಿರ್ವಹಣೆ, ಕೇಂದ್ರ ಧನ ಸಹಾಯ ನೀಡುವ ಬಗ್ಗೆ ಮತ್ತು ತ್ರೈಮಾಸಿಕ ಪ್ರಗತಿ ವರದಿ ವಿಷಯವನ್ನು ನಿರ್ವಹಿಸುವುದು.
6. **ಶೀಘ್ರಲಿಪಿಗಾರರು:–** ಮೇಲಾಧಿಕಾರಿಯವರು ಹೇಳುವ ಉಕ್ತಲೇಖನವನ್ನು ಬೆರಳಚ್ಚಿಸಿಕೊಡುವುದು, ಟಿಪ್ಪಣಿ ಮತ್ತು ಅರೆ ಸರ್ಕಾರಿ ಪತ್ರಗಳನ್ನು ಬೆರಳಚ್ಚಿಸುವ ಕೆಲಸ ಹಾಗೂ ಶಾಖೆಯ ಕೆಲಸವನ್ನು ನಿರ್ವಹಿಸುವುದು.
7. **ಕಿರಿಯ ಸಹಾಯಕರು:–** ಶಾಖೆಗೆ ಸಂಬಂಧಿಸಿದ ಪತ್ರಗಳು ಮತ್ತು ಕಡತಗಳನ್ನು ಭೌತಿಕವಾಗಿ ಹಾಗೂ ಗಣಕ ಯಂತ್ರದ ಕಡತ / ಪತ್ರ ನಿರ್ವಹಣಾ ವ್ಯವಸ್ಥೆಯ ಮೂಲಕ ಸ್ವೀಕೃತಿ ಮತ್ತು ರವಾನೆ ಕೆಲಸ ನಿರ್ವಹಿಸುವುದು.

ಇತರೆ ವಿವರಗಳು ಏನೂ ಇರುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ಬಿ. ರುದ್ರಪ್ಪ,**

ಸರ್ಕಾರದ ಅಧೀನ ಕಾರ್ಯದರ್ಶಿ(ಸೇ–ಬಿ)

ಜಲಸಂಪನ್ಮೂಲ ಇಲಾಖೆ.

PR 79